

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 332 |
| ಸದಸ್ಯರು ಹೆಸರು | : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : 14.09.2021 |
| ಉತ್ತರಿಸುವ ಸಚಿವರು | : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನಗರಸಭೆ, ಪುರಸಭೆ ಹಾಗೂ ಪಟ್ಟಣ ಪಂಚಾಯತ್‌ಗಳಲ್ಲಿ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -ಬಂದಿದೆ- |
| ಆ) | ಹಾಗಿದ್ದಲ್ಲಿ, ಖಾಲಿ ಹುದ್ದೆ ತುಂಬಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? | ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ 'ಬಿ' ಮತ್ತು ಗ್ರೂಪ್ 'ಸಿ' ವೃಂದದ (ಹೈದ್ರಾಬಾದ್ ಕರ್ನಾಟಕ ಪ್ರದೇಶದ ಒಳಗೊಂಡು) 1104 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿ ಸ್ವೀಕೃತವಾಗಿದ್ದು, ಅದರಲ್ಲಿ ಒಟ್ಟು 763 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗಿದ್ದು, 721 ಅಭ್ಯರ್ಥಿಗಳು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಪ್ರಸ್ತುತ ನಿರ್ದೇಶನಾಲಯದಲ್ಲಿ ವಿವಿಧ ವೃಂದದ ಒಟ್ಟು 69 ಹುದ್ದೆಗಳ ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ಉಳಿದಂತೆ 519 ಹುದ್ದೆಗಳ ಆಯ್ಕೆ ಪಟ್ಟಿ ಕರ್ನಾಟಕ ಲೋಕಸೇವಾ ಆಯೋಗದಿಂದ ಸ್ವೀಕೃತವಾಗಬೇಕಿರುತ್ತದೆ. ಉಳಿದಂತೆ ನೇರ ನೇಮಕಾತಿಯಡಿ ಖಾಲಿ ಇರುವ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಮೂಲ ವೃಂದದ 293 ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ವಹಿಸಲಾಗುತ್ತಿದೆ.<br><br>ಜಿಲ್ಲಾ ಮಟ್ಟದಲ್ಲಿ ಮುಂಬಡ್ತಿ ಕೋಟಾದಡಿಯಲ್ಲಿ ವಿವಿಧ 'ಸಿ' ವೃಂದದಲ್ಲಿ ಖಾಲಿ ಹುದ್ದೆಗೆ ಮುಂಬಡ್ತಿಗೆ ಸಂಬಂಧಿಸಿದಂತೆ ನಿರ್ದೇಶನಾಲಯದ ಪತ್ರ ಸಂಖ್ಯೆ ಇ-243772 ಡಿಎಂಎ/ ಇಎಸ್‌ಟಿ/2 ಎಸ್‌ಡಿಎ/ 3/2020 ದಿನಾಂಕ 05.08.2020 ಹಾಗೂ ದಿನಾಂಕ 22.01.2021ರಲ್ಲಿ ಖಾಲಿ ಇರುವ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. |

ಸಂಖ್ಯೆ: ನಅಇ 07 ಎಲ್‌ಸಿಕ್ಯೂ 2021

(ಎನ್.ನಾಗರಾಜು (ಎಂ.ಟಿ.ಬಿ))
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು